# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 690 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 23-07-2019 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಡವರು ಹಾಗೂ ಮಧ್ಯಮ ವರ್ಗದ ಜನರಿಗೆ ಉಚಿತ ಆರೋಗ್ಯ ಸೇವೆಯನ್ನು ಒದಗಿಸಲು ಜಾರಿಗೆ ತಂದಿರುವ "ಆಯುಷ್ಮಾನ್ ಭಾರತ್ ಆರೋಗ್ಯ ಕರ್ನಾಟಕ" ಯೋಜನೆಯ ಅನುಷ್ಠಾನದಲ್ಲಿ ದುರ್ಬಳಕೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಯೋಜನೆಯ ಅನುಷ್ಠಾನದಲ್ಲಿ ದುರ್ಬಳಕೆ ಯಾಗುತ್ತಿರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ |
| ಆ | ಬೆಳಗಾವಿ ಜಿಲ್ಲೆಯಲ್ಲಿ ಈ ಯೋಜನೆಗಾಗಿ ನೀಡುವ ಕಾರ್ಡ್‌ಗಳನ್ನು ವಿತರಿಸಲು ಸರ್ಕಾರ ನಿಯೋಜಿಸಿದ ಸಂಸ್ಥೆಗಳ ಹೆಸರುಗಳನ್ನು ನೀಡುವುದು; | • ಬೆಳಗಾವಿ ಜಿಲ್ಲೆಯ ಸಮುದಾಯ ಆರೋಗ್ಯ ಕೇಂದ್ರಗಳಾದ ನಿಪ್ಪಾಣಿ, ಸಂಕೇಶ್ವರ, ಬೆಳವಾಡಿ, ಯಕ್ಸಾಂಬ, ಹಿರೇಬಾಗೆವಾಡಿ, ಹೊಸಕೋಟಿ, ಕಬ್ಬೂರು, ಕಗ್ಗವಾಡ, ಕಿತ್ತೂರು, ಕುಡಚಿ, ಮೂಡಲಗಿ, ಮುಗುಲಕೇಡ್, ನಾಗನೂರು, ನಂದಗಡ್ ಗಳಲ್ಲಿ ವಿತರಿಸಲಾಗುತ್ತಿದೆ.<br>• ಬೆಳಗಾವಿ ಜಿಲ್ಲೆಯ ತಾಲೂಕು ಆಸ್ಪತ್ರೆಗಳಾದ ಅಥಣಿ, ಬೈಲಹೊಂಗಲ, ಚಿಕ್ಕೋಡಿ, ಗೋಕಾಕ್, ಹುಕ್ಕೇರಿ, ಕನಾಪುರ್, ರಾಯಬಾಗ ರಾಮದುರ್ಗ, ಸವದತ್ತಿಗಳಲ್ಲಿ ವಿತರಿಸಲಾಗುತ್ತಿದೆ.<br>• ಜಿಲ್ಲಾ ಆಸ್ಪತ್ರೆ ಬೆಳಗಾವಿ.<br>• ಕರ್ನಾಟಕ ಒನ್ ಕೇಂದ್ರಗಳಾದ ಅನಗೋಳ, ಅಶೋಕ ನಗರ, ಬಿ.ಯು.ಡಿ.ಎ ಕಾಂಪ್ಲೆಕ್ಸ್, ಹಳೆಯ ಕಾರ್ಪೊರೇಷನ್ ಕಟ್ಟಡ, ಗೋವವಸ್ ಕಾಂಪ್ಲೆಕ್ಸ್ ಬೆಳಗಾವಿಗಳಲ್ಲಿ ವಿತರಿಸಲಾಗುತ್ತಿದೆ.<br>• ಸೇವಾ ಸಿಂಧು ಕೇಂದ್ರಗಳಾದ ಮಡಭಾವಿ, ಅಥಣಿ ಹಲ್ಯಾಲ್, ಮಹಿಷವಾಡಗಿ, ಕೊಟ್ಟಲಗಿ, ಕಂಗ್ರಲಿ, ಮಹಂತೇಶ್ ಹಲಗಿಮರಡಿ ಪದ್ಮ ಕುಂಜ್, ಮಾಯ ಕಮ್ಯುನಿಕೇಶನ್, ಸುಲಗ, ಮುಚಂಡಿ, ವಡಗೋನ್, ಹಿಂಡಲಗ, ಶ್ರೀ ಬಾಲಾಜಿ ಐ.ಟಿ ಸಲ್ಯೂಷನ್ ಮಾಮಿ ಗಲ್ಲಿ ಬೆಳಗಾವಿ, ಕಾನಾಪುರ, ಚಂಡರಗಿ, ದೇಶನುರ್, ಶಿರಸಂಗಿ ಗಳಲ್ಲಿ ವಿತರಿಸಲಾಗುತ್ತಿದೆ. |

| | | |
|---|---|---|
| ಇ | "ಅನರ್ಹರಿಗೂ ಆಯುಷ್ಮಾನ್" ಶೀರ್ಷಿಕೆಯಲ್ಲಿ ಏಪ್ರಿಲ್ 26 ರಂದು ಕನ್ನಡ ಪತ್ರಿಕೆಯೊಂದರಲ್ಲಿ ಫಲಾನುಭವಿಗಳಿಂದ ನಿಗಧಿಪಡಿಸಿದ ದರಕ್ಕಿಂತ ಹೆಚ್ಚು ಹಣ ವಸೂಲಿ ಮಾಡಿ ಅನರ್ಹರಿಗೂ ಕಾರ್ಡ್ ನೀಡಿರುವ ಕುರಿತು ವರಧಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಈ | ಇಂತಹ ಅವ್ಯವಹಾರವನ್ನು ತಡೆಯಲು ಸರ್ಕಾರ ಕೈಗೊಂಡ ಕ್ರಮಗಳೇನು ಹಾಗೂ ಈಗಾಗಲೇ ತಪ್ಪು ಎಸಗಿರುವವರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಕಾರ್ಡ್‌ಗಳ ವಿತರಣೆಯಲ್ಲಿ ಆಗುವ ಲೋಪದೋಷಗಳನ್ನು ತಡೆಗಟ್ಟಲು ಈ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗಿದೆ.<br>• ಯುಸರ್ ಐಡಿ ಹಾಗೂ ಪಾಸ್‌ವರ್ಡ್‌ಗಳ ದುರ್ಬಳಕೆ ಮಾಡಿದ್ದಲ್ಲಿ ಸಿಬ್ಬಂದಿಗಳ ಮೇಲೆ ಶಿಸ್ತು ಕ್ರಮ ಕೈಗೊಳ್ಳುವುದು.<br>• ನಿಗದಿತ ದರಕ್ಕಿಂತ ಹೆಚ್ಚು ಹಣ ಪಡೆದ ಸಂಸ್ಥೆ ಹಾಗೂ ಸಹಕರಿಸಿದ ಮಧ್ಯವರ್ತಿಗಳ ಮೇಲೆ ಕ್ರಿಮಿನಲ್ ಕೇಸ್ ದಾಖಲಿಸುವುದು.<br>• ಬಿ1 ಕೆ1 ಕೇಂದ್ರಗಳಲ್ಲಿ ಕಾರ್ಡ್ ವಿತರಣೆ ಮಾಡುವ ಸಿಬ್ಬಂದಿಗೆ ತಂತ್ರಾಂಶವನ್ನು ಬಳಸಲು ಬಯೋಮೆಟ್ರಿಕ್ ಆಧಾರಿತ ದೃಢೀಕರಣ ನೀಡುವುದು.<br>• ಕಾರ್ಡ್‌ಗಳನ್ನು ಫಲಾನುಭವಿಯ ಆಧಾರ್ ಕಾರ್ಡ್ ಹಾಗೂ ಬಯೋಮೆಟ್ರಿಕ್ ಆಧಾರದ ಮೇಲೆ ನೀಡುವುದು.<br>• ಕಾರ್ಡ್ ವಿತರಿಸುವ ಎಲ್ಲಾ ಕೇಂದ್ರಗಳಲ್ಲಿ ಕಾರ್ಡ್ ನ ಮೊತ್ತವನ್ನು ನಮೂದಿಸುವುದು.<br><br>ಕ್ರಮ<br>ಬೆಳಗಾವಿ ಜಿಲ್ಲೆಯ ಸುಳಗ ತಾಲ್ಲೂಕಿನ ಪ್ರಕಾಶ್ ಪೋಟೋ ಸ್ಟುಡಿಯೊದ ಶ್ರೀ ಪ್ರಕಾಶ್ ಪರ್ನಾಂಡಿಸ್ ಎಂಬುವರು ಹೆಚ್ಚು ಹಣ ಪಡೆದು ಅನದಿಕೃತವಾಗಿ ಕಾರ್ಡ್ ವಿತರಿಸುತ್ತಿರುವ ವಿಷಯ ತನಿಖೆ ವೇಳೆಯಲ್ಲಿ ತಿಳಿದು ಬಂದಿದ್ದು ಇವರ ವಿರುದ್ಧ ದಿನಾಂಕ: 30.04.2019 ರಂದು ಕಾಕತಿ ಪೋಲಿಸ್ ಠಾಣೆಯಲ್ಲಿ ದೂರು ದಾಖಲಿಸಲಾಗಿದೆ. |

**ಆಕುಕ 23 ಎಸ್‌ಬಿವಿ 2019**

(ಶಿವಾನಂದ ಎಸ್ ಪಾಟೀಲ)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು